


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 25-03-2021 ಪ್ರಶ್ನೆ ಸಂಖ್ಯೆ : 1852 (2140)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ರಘುನಾಥ್ ರಾವ್ ಮಲ್ಕಾಪೂರೆ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 25-03-2021

ಉತ್ತರಿಸುವ ಸಚಿವರು: ಮಾನ್ಯ ಮುಖ್ಯಮಂತ್ರಿಗಳು

ವಿಷಯ : ಕಲ್ಯಾಣ ಕರ್ನಾಟಕ ಸ್ಥಳೀಯ ವೃಂದದಲ್ಲಿ ಮೀಸಲಿರಿಸಲಾದ ಹುದ್ದೆಗಳ ಕುರಿತು

(ಅ) ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ಕಲ್ಯಾಣ ಕರ್ನಾಟಕ ಸ್ಥಳೀಯ ವೃಂದದಲ್ಲಿ ಮೀಸಲಿಟ್ಟ ಹುದ್ದೆಗಳು, ನೇರ ನೇಮಕಾತಿ ಮತ್ತು ಮುಂಬಡ್ತಿ ರಡಿ ಭರ್ತಿಯಾದ ಹಾಗೂ ಖಾಲಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು ; (ಸಂಪೂರ್ಣ ಮಾಹಿತಿ ನೀಡುವುದು)

(ಆ) ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಹೈದ್ರಾಬಾದ್-ಕರ್ನಾಟಕ ಸ್ಥಳೀಯ ವೃಂದದ ನೌಕರರುಗಳಿಗೆ ನೀಡಬೇಕಾಗಿರುವ ಮುಂಬಡ್ತಿಯನ್ನು ಪ್ರಶ್ನಿಸಿ, 2014ರಲ್ಲಿ ಸಲ್ಲಿಸಲಾದ ಪ್ರಕರಣವು 2017ರಂದು ತೆರವುಗೊಂಡ ನಂತರ ಸಚಿವಾಲಯದ ರಾಜ್ಯ ಮಟ್ಟದ ಸ್ಥಳೀಯ ವೃಂದದ ಅಧಿಕಾರಿ/ನೌಕರರುಗಳ ಹಿಂದಿನ ಅರ್ಹದಾಯಕ ಸೇವಾ ಜ್ಯೇಷ್ಠತೆಯನ್ನು ಪರಿಗಣಿಸಿ, ಬಡ್ತಿ ನೀಡಲಾಗುತ್ತಿದೆಯೇ; (ಮಾಹಿತಿ ನೀಡುವುದು)

(ಇ) ದಿನಾಂಕ: 14.05.2020ರ ಸಚಿವ ಸಂಪುಟದ ಉಪ ಸಮಿತಿಯಲ್ಲಿ ನಿರ್ಣಯಿಸಿರುವಂತೆ, ಕಲ್ಯಾಣ ಕರ್ನಾಟಕ ಕಾಯ್ದೆಯನ್ವಯ ಸರ್ಕಾರದ ಅಧೀನ ಕಾರ್ಯದರ್ಶಿ ವೃಂದದ ಅಂತಿಮ ಸಂಯೋಜಿತ ಜ್ಯೇಷ್ಠತಾ ಪಟ್ಟಿಯನ್ನು (Combined Seniority List) ಪ್ರಕಟಿಸಲಾಗಿದೆಯೇ; ಪ್ರಕಟಿಸಿದ್ದಲ್ಲಿ, ಅದರ ಪ್ರತಿ ನೀಡುವುದು ; ಇಲ್ಲದಿದ್ದಲ್ಲಿ, ಇಲ್ಲಿಯವರೆಗೆ ಪ್ರಕಟಿಸದಿರಲು ಕಾರಣಗಳೇನು ? (ವಿವರಣೆ ನೀಡುವುದು)